# ಕಾನನ

ನಿಸರ್ಗದೆಡೆಗೆ ಪಯಣ

JULY 2011

## ಲೇಖನಗಳು

* ಹಕ್ಕಿಲೋಕ - ನಾಗೇಶ್.ಓ.ಎಸ್
* ಸುಬ್ಬನ್ ಸಾಬಿ ಮತ್ತು ಆನೆ - ಅಶ್ವಥ್ ಕೆ.ಎನ್
* ಕಾಳಿ - ಅಶ್ವಥ್ ಕೆ.ಎನ್



ಅನಿಸಿಕೆಗೆ

E-mail: kaanana.mag@gmail.com



# ಸಂಪಾದಕೀಯ

ಪ್ರಿಯ ಓದುಗರೇ. . . .

ಶ್ರಾವಣದ ಆಗಮನ ನಿಸರ್ಗಕ್ಕೆ ಸ್ವರ್ಗವನ್ನೆ ತರುತ್ತದೆ. ಎಲ್ಲೇಲ್ಲೂ ಹಸಿರು ಕಂಗೊಳಿಸಿ ತುಂತುರು ತುಂತುರಾಗಿ ಹನಿಯುವ ಜಡಿಮಳೆಗೆ, ಸಕಲ ಕೀಟದಿಂದ ಹಿಡಿದು ಆನೆಯಂತಹ ದೊಡ್ಡಜೀವಿಗಳೂ ಕೂಡ ಸಂತಸದಿಂದ ಇರುವ ಕಾಲ. ಆದರೆ ಮನುಷ್ಯರಾದ ನಾವು ನಮ್ಮ ಸ್ವಾರ್ಥಕ್ಕಾಗಿ ಹಾಗೂ ಹೆಚ್ಚಿದ ಜನಸಂಖ್ಯೆಯ ಅಸಂಖ್ಯ ಜನಗಳ ದುರಾಸೇಗಳನ್ನು ತಣಿಸಿಲು ಕಾಡುಗಳನ್ನು ಕಡಿದು, ಗಣಿಗಳನ್ನು ತೆರೆದು, ಕಬ್ಬಿಣ ಮೊದಲಾದ ಮೂಲವಸ್ತುಗಳನ್ನ ಹಣವಾಗಿಸಿ, ಎಲ್ಲೊ ಅಲ್ಪ ಸ್ವಲ್ಪ ಉಳಿದಿರುವ ವನ್ಯ ಜೀವಿಗಳ ಜೀವನಕ್ಕೆ ಸಂಚಕಾರ ತಂದೊಡ್ಡಿದ್ದೇವೆ.
ಮತ್ತೆದೇ ಜೀವಿಗಳ ರಕ್ಷಣೆಗಾಗಿಯೇ ಹಣ ನಿಗದಿಮಾಡಿ, ನಮ್ಮ ಉದ್ದೇಶಗಳಿಗೆ ಬಳಸಿಕೊಳ್ಳುವ ಹೊಸ ಮೋಸದ ಜಾಲವನ್ನೇ ಸೃಷ್ಟಿಸಿಕೊಂಡು ನಮಗೆ ನಾವೇ ಮೋಸ ಮಾಡಿಕೊಳ್ಳುತ್ತಿದ್ದೆವೆ.

ಕಾಡಿನ ತಪ್ಪಲಲ್ಲಿ ನಾವು ಕಂಡಂತಹ ‘ಹೆಣ್ಣಾನೆ ಹಾಗೂ ಮರಿಗಳ ಗುಂಪು’ ಸುಖವಾಗಿ ಕಾಡಿನಲ್ಲಿ ಜೀವಿಸುತ್ತಿರುವಂತೆ, ಈ ಸಂಚಿಕೆಯ ಮುಖಪುಟದಲ್ಲಿ ಕಂಡರೂ. . .ಅವುಗಳ ಜೀವನದ ಒಂದೊಂದು ದಿನವು, ರೈತರು ಬೇಲಿಗೆ ಬಿಡುವ ಕರೆಂಟಿನ ಭಯ, ಕೆಲವು ಜನ ಆನೆಗಳಿಗೆ ಕಳ್ಳಗನ್ನುಗಳಲ್ಲಿ ಗುಂಡಿಗೆ ಬದಲಾಗಿ ಎರಡು ಇಂಚು ಉದ್ದದ ದಪ್ಪ ಮೊಳೆಯನೇ ಗನ್ನಿಗೆ ಲೋಡ್ ಮಾಡಿ ನೇರ ಆನೆಗೆ ಗುರಿಯಿಡುವವರ ಬಗ್ಗೆ ಕೇಳಿದ್ದೆವೆ.

ಬಿಡುವಿಲ್ಲದ ಕಳ್ಳಬೇಟೆ, ಗಣಿಗಾರಿಕೆ, ಹಾಗೂ ಹೆಚ್ಚಿದ ಮಾನವನ ದುರಾಸೆಗೆ ವನ್ಯಪ್ರಾಣಿಗಳು ನಲುಗಿ ನಿರ್ನಾಮವಾಗುವ ಕಾಲ ಹಾಗೂ ಅದರ ಜೊತೆಗೆ, ಮನುಷ್ಯರಾದ ನಾವೂ ಕಷ್ಟಕರ ಸನ್ನಿವೇಶವನ್ನು ಅನುಭವಿಸುವ ಕಾಲ ಕಾಲಬುಡದಲ್ಲೇ ಇದೆ.

ಈ ಸಂಚಿಕೆಯಲ್ಲಿ ಗ್ರಾಮೀಣ ಜನರ ಆನೆಯ ಜೀವನದ ಬಗ್ಗೆ ವನ್ಯಜ್ಞಾನವನ್ನು ಅಶ್ವಥ್.ಕೆ.ಎನ್ ರವರು ಸುಬ್ಬನ್ ಸಾಬಿ ಮತ್ತು ಆನೆ ಎಂಬ ಕತೆಯಲ್ಲಿ ರಸವತ್ತಾಗಿ ವರ್ಣಿಸಿದ್ದಾರೆ ಹಾಗೂ ಬಾಲಕುಮಾರನ ಹದ್ದಿನ ಮೊಟ್ಟೆ ಬೇಟೆಯೂ ಕೂಡ.

**ಪ್ರಕೃತಿಯ ಬಗ್ಗೆ ಅರಿವು ಮೂಡಿಸುವ ನಮ್ಮ ಪುಟ್ಟ ಪತ್ರಿಕೆಯನ್ನು ಓದಿ ಸಲಹೆ ಸೂಚನೆಯನ್ನು ನಿಮ್ಮಿಂದ ಆಶಿಸುತ್ತೆವೆ. ಮತ್ತು ಈ ಪತ್ರಿಕೆಯು ನಿಮಗಾಗಿಯೇ ಇದೆ, ವನ್ಯಲೋಕ, ಕಾಡು, ಪ್ರಾಣಿ-ಪಕ್ಷಿಗಳು, ಮತ್ತು ಸಾಹಿತ್ಯ ವಿಚಾರಗಳು, ಕವನ, ಕಥೆಗಳು, ವಿಜ್ಞಾನ, ಪ್ರವಾಸ, ಛಾಯಚಿತ್ರಗಳು ಮುಂತಾದ ವಿಷಯಗಳನ್ನು ಲೇಖನಗಳ ಮೂಲಕ ಈ ಜಗತ್ತಿಗೆ ಸಾದರಪಡಿಸಬಹುದು. ಲೇಖನಗಳನ್ನು ಕಳುಹಿಸಬಹುದಾದ ಇ-ಮೇಲ್ ವಿಳಾಸ: kaanana.mag@gmail.com ಗೆ ಕಳುಹಿಸಿ.**



# ಹಕ್ಕಿಲೋಕ

* ಹದ್ದು

**ವೈಜ್ಞಾನಿಕ ಹೆಸರು:** ***Milvus migrans***
**ಇಂಗ್ಲೀಷ್ ಹೆಸರು:** **Black Kite**

ಆಚಾರಿ ಪೈಕಿಯ ಕುಮಾರನನ್ನು ನಾವೆಲ್ಲರು ತೀಟೆಕುಮಾರನೆಂದೇ ಕರೆಯುತ್ತೆವೆ, ಏಕೆಂದರೆ ಚಿಕ್ಕಂದಿನಿಂದ ತೀಟೆ ಮತ್ತು ತುಂಟನಾಗಿದ. ತೀಟೆಕುಮಾರನು ಶಾಲೆಗೆ ಒಂದೆರಡು ಕಿಲೋಮೀಟರ್ ಕಾಡಿನ ದಾರಿಯಲ್ಲಿ ನಡೆದು ಹೋಗಬೇಕಿತ್ತು. ಅವನ ಮನೆಯಲ್ಲಿ ಓಡೆದು-ಬಡಿದು ಶಾಲೆಗೆ ಕಳಿಸಿದರೆ, ಶಾಲೆಯ ದಾರಿಯಲ್ಲಿ ನಡೆದು ಹೋಗುತ್ತಿದ್ದ ಅಷ್ಟೇ. . .ಶಾಲೆಗೆ ಹೋಗುತ್ತಿರಲ್ಲಿ ಲ್ಲ ಅಲ್ಲೇ ದಾರಿ ಮಧ್ಯದಲ್ಲಿಯೇ ಬೇಲಿ-ಪೊದೆಗಳಲ್ಲಿ ಮಾಯಾವಾಗುತ್ತದ್ದ, ಬ್ಯಾಗಿನಲ್ಲಿ ಸದಾ ಕ್ಯಾಟರುಬಿಲ್ಲು ಇರುತ್ತಿತ್ತು. ಹಕ್ಕಿಗಳ ಶಿಕಾರಿಯಲ್ಲಿ ಸಂಜೆಯುವರಿಗೂ ಅಲೆಯುತ್ತಾ. . . ಸಂಜೆ ಶಾಲೆ ಬಿಡುವ ಸಮಯಕ್ಕೆ ಸರಿಯಾಗಿ ಇತರ ಶಾಲಾಮಕ್ಕಳ ಜೊತೆ ಮನೆಗೆ ಬರುತ್ತಿದ್ದ.




ತೀಟೆಕುಮಾರನಿಗೆ ಶಾಲೆ ದಾರಿಯ ಪುಟ್ಟಕಾಡಿನಲ್ಲಿ ಎಂತಹ ಪಕ್ಷಿಗಳಿವೆ, ಯಾವ ಯಾವ ಮರ-ಗಿಡಗಳಲ್ಲಿ ಗೂಡುಗಳಿವೆ, ಯಾವ ಹಕ್ಕಿಯ ಮಾಂಸ ತುಂಬ ರುಚಿ ಇದೆ, ಎಂಬುದು ಕುಮಾರನಿಗೆ ಚೆನ್ನಾಗಿ ಗೊತ್ತು. ಮರಗಳನ್ನು ಏರುವುದರಲ್ಲಿ ಪಟಿಂಗ.

ಸುಮಾರು ಇಪ್ಪತ್ತೈದು ಮೀಟರ್ ಎತ್ತರವಾದ ಸರ್ವೆಮರದ ತುತ್ತತುದಿಯಲ್ಲಿ ಹದ್ದಿನ ಮೊಟ್ಟೆಗಳನ್ನು ಕದಿಯಲು ಕುಮಾರನು ಹತ್ತುತ್ತಿದ್ದ. ಇನ್ನೇನು ಗೂಡಿನ ಸಮೀಪಕ್ಕೆ ಬರುವಷ್ಟರಲ್ಲಿ ಆಕಾಶದಲ್ಲಿ ಹಾರಾಡುತ್ತಿದ ಹೆಣ್ಣು-ಗಂಡು ಎರಡು ಹದ್ದುಗಳು ಸೇರಿ ತೀಟೆಕುಮಾರನಿಗೆ ತಲೆಯ ಮೇಲೆ ಪೈಡ್. . . .ಪೈಡ್. . . . ಎಂದು ಹಾರಿಬಂದು ಒಡೆಯತೊಡಗಿದವು.




ಅಯ್ಯೊಯ್ಯಪ್ಪೋ. . . ಸರಿಯಿಲ್ಲ ಇವು, ಸರಿಯಾಗಿ ಕಚ್ಚುತ್ತವೆ, ಎಂದು ದೊಂಬಿಹಿಡುತ್ತಾ. . . ಸರಸರನೆ ಜಾರಿ ಕೆಳಗೆ ಬಿದ್ದು ಕೈಕಾಲುಗಳಿಗೆ ಗಾಯಮಾಡಿಕೊಂಡ, ಆದರೂ ಎರಡು ಹದ್ದುಗಳು ಸೇರಿ ಕುಮಾರನ ಕಿವಿಗಳಿಗೆ ಬಲವಾದ ಕೊಕ್ಕಿನಿಂದ ಕುಕ್ಕಿ, ಚೂರುಪಾರು ಮನುಷ್ಯನ ಮಾಂಸದ ರುಚಿನೋಡಿದವು.

ತೀಟೆಕುಮಾರನು “ ಈ ಹಕ್ಕಿ ಮೊಟ್ಟೆನೂ ಬೇಡ. . .!

ಇದರ ಸಹವಾಸನೂ ಬೇಡ. . . !” ಎಂದು ಬ್ಲಾಕ್ ಕೈಟ್ ಗಳಿಗೆ ಶಾಪ ಹಾಕಿದ.

ಸಾಮಾನ್ಯವಾಗಿ ಈ ಹದ್ದುಗಳು ರಣಹದ್ದಿಗಿಂತ ಸ್ವಲ್ಪ ಚಿಕ್ಕದಾದ ಕಡುಕಂದು ಕಪ್ಪು ಪಕ್ಷಿ. ಇದರ ಬಾಲದ ತುದಿ ಕವಲು ಹೋಡೆದಿದೆ. ಮಾಂಸವನ್ನು ಕೀಳಲು ಅನುಕೂಲವಾಗುವಂತಹ ಮೊನಚಾದ ಕಪ್ಪುಕೊಕ್ಕು. ಬಲಿಷ್ಠವಾದ ಹಳದಿಯ ಕಾಲುಗಳಿವೆ, ಜನವಸತಿ ಪ್ರದೇಶ ಮತ್ತು ಕುರುಚಲು ಕಾಡುಗಳಲ್ಲಿ ಕಂಡುಬರುತ್ತವೆ. ಇದು ಗೂಡನ್ನು ಸಣ್ಣ ಸಣ್ಣ ಕಡ್ಡಿಗಳಿಂದ ವೃತ್ತಾಕಾರವಾಗಿ ಕಟ್ಟುತ್ತವೆ.

ಹದ್ದುಗಳು ಚಳಿಗಾಲದಲ್ಲಿ ಕೆಂಪುಚುಕ್ಕೆಗಳು ಇರುವಂತಹ ಎರಡು–ಮೂರು ತಿಳಿಗುಲಾಬಿ ಮಿಶ್ರಿತ ಬಿಳಿಮೊಟ್ಟೆಗಳಿಗೆ ಸುಮಾರು 28 ರಿಂದ 32 ದಿನಗಳವರೆಗೆ ಕಾವು ಕೊಟ್ಟು ಮರಿಮಾಡುತ್ತವೆ.





# ಸುಬ್ಬನ್ ಸಾಬಿ ಮತ್ತು ಆನೆ

ಮಾರನ ತಮ್ಮ ಮರಿಗ ತಲೆತಲಾಂತರಗಳಿಂದ ಎಮ್ಮೆ ಸಾಕಾಣಿಕೆಯಲ್ಲಿ ಸುತ್ತಮುತ್ತಲಿನ ಹದಿನಾರು ಹಳ್ಳಿಗಳಿಗೆ ಹೆಸರುವಾಸಿ, ಮರಿಗನ ಎಮ್ಮೆಗಳಲ್ಲಿ ಎಂಟತ್ತು ಎಮ್ಮೆಗಳಿದ್ದು, ಒಂದೆರಡು ಗೂಳಿಗಳಿವೆ. ಎರಡು ಮೂರು ಎಮ್ಮೆಗಳು ವರ್ಷಪೂರ್ತಿ ಹಾಲುಕೊಡುತ್ತವೆ, ಮರಿಗ ದಿನಚರಿಯಂತೆ ಬೆಳಗ್ಗೆ ಹಾಲುಕರೆದು ವರ್ತನೆಯ ಲೆಕ್ಕದಲ್ಲಿ ಮನೆಗಳಿಗೆ ಹಾಕಿಬರುತ್ತಾನೆ. ಕಾಡಿನ ಪಕ್ಕದಲ್ಲೇ ಹಳ್ಳಿಯಿರುವುದರಿಂದ ಎಮ್ಮೆಗಳನ್ನು ಬೆಳಗ್ಗೆ ಕಾಡಿಗೆ ಹಟ್ಟಿದರೆ ಸಂಜೆ ಹಾಲುಕರೆಯುವ ಹೊತ್ತಿಗೆ ತಾವಗಿಯೇ ಮನೆಯ ಕಡೆ ಬರುತ್ತವೆ ಮರಿಗನ ಎಮ್ಮೆಗಳು.



ಅಂದೊಂದು ದಿನ ಸಂಜೆ ಕೊನೆಮನೆ ರಾಮಚಾರಿಯ ಜಗುಲಿ ಮೇಲೆ ನಾನು ಮತ್ತು ಸುಬ್ಬನ್ ಸಾಬಿ ಕುಳಿತು ಮಾತನಾಡುತ್ತಿರಬೇಕಾದರೆ ಮಾರನ ತಮ್ಮ ಮರಿಗ ದಾಪುಗಾಲು ಹಾಕುತ್ತಾ ಕಾಡು ದಾರಿ ಹಿಡಿದು ಸರಸರನೇ ನಡೆಯುತ್ತಿದ್ದ. ಸುಬ್ಬನ್ ಸಾಬಿಯು

"ಏನ್ ಮರಿಗಣ್ಣ ಎಲ್ಕಾ? ಬಿರ್ ಬಿರ್ನ. . .

ಹೊಗ್ತಿದೀಯಾ. . . ." ಎಂದ

ಮರಿಗ " ಏನ್ ಸುಬ್ಬನು ಮಾಡೋದು. . . ! ಐದ್ ಗಂಟೆ ಆದ್ರು ಎಮ್ಮೆಗ್ಳು ಇನ್ನೂ ಮನೆಕಡೆ ಬಂದಿಲ್ಲ,

ಆದ್ಕೆ ಅರ್ಜುನನ್ ಕುಂಟೆತನ್ಕ ಹೋಗ್ಬರ್ತಿನಿ. . ." ಎಂದು ಸರಸರನೇ ಮುಂದೆ ನಡೆದ.

ಸುಬ್ಬನ್ ಸಾಬಿಯು ನನ್ನ ಮುಖವನ್ನು ನೋಡಿ "ಏನ್ ಮಾರಾಯ ಸಂಜೆ ಆಗೆ ಒಂದ್ರೋಂಡ್ ಮರಿಗನ ಜೋತೆ ಕಾಡ್ ಕಡೆ ಹೋಗ್ಬರನಾ. . ?" ಎಂದ.

ಹೋಲ್ಲ. . . . .ನಡೆಯಪ್ಪ ಇನ್ನೆನು ಕೆಲ್ಸ. . . ಎಂದು, ಮುಖದಲ್ಲಿಯೇ ಸಮ್ಮತಿಯ ಭಾವನೆಯನ್ನು ತೋರಿಸಿದ್ದೆ ತಡ.

ಸುಬ್ಬನ್ ಸಾಬಿ.

"ಹೋ. . . . ಮರಿಗಣ್ಣೋ. . . .!

ಹೋ. . . . ಮರಿಗಣ್ಣೋ. . . .ನಾವು ಬರ್ತಿವಿ, ನಾವು ಬರ್ತಿವೀ. . . ಕಾಡ್ ಕಡೆ" ಎಂದು ಜೋರಾಗಿ ದೊಂಬೆ ಹಾಕಿದ, ಸರಸರನೆ ನಡೆದು ಮರಿಗನ ಜೊತೆಸೇರಿಕೊಂಡೆವು.

ಮರಿಗನು ನಮಗೆ ಗುರುಗಳಾಗಿ, ನಾವು ಮರಿಗನಿಗೆ ಶಿಷ್ಯರಾಗಿ, ಕಾಡು ಮಗ್ಗುಲಿನ ಉಪ್ಪನೀರಳ್ಳದಲ್ಲಿ ಇಳಿದು ಸಾಗಬೇಕಾದರೆ, ಇಕ್ಕಟ್ಟಿನ ದಾರಿ ಸುತ್ತಲ್ಲೂ ದಟ್ಟವಾದ ಮರಗಳು, ಸೀಗೆಪೊದೆಯಂತ ದೊಡ್ಡ ದೊಡ್ಡ ಪೊದೆಗಳ ನಡುವೆ, ಮುಂದೆ ಮರಿಗ, ಮರಿಗನ ಹಿಂದೆ ಸುಬ್ಬನ್ ಸಾಬಿ ನಂತರ ನಾನು ನಡೆಯುತ್ತಿದೆವು.

ಇಕ್ಕಟಿನ ದಾರಿಯಲ್ಲಿಯೇ ಈಗತಾನೆ ನಡೆದು ಹೋಗಿದ ಒಂಟಿಆನೆಯ ಹೆಜ್ಜೆಗಳನ್ನು ಕಂಡು,

ಮರಿಗ "ಇಲ್ಲೇ ಎಲ್ಲೋ ಆನೆ ಇರ್ಬೇಕೂ ಹುಷರಾಗಿ ಬರ್ರಿ. . .!" ಎಂದು ಎಚ್ಚರಿಕೆಯನ್ನು ನೀಡಿದ.

ಈಗಾಗಲೇ ಹೆಜ್ಜೆಗಳನ್ನು ಕಂಡಿದ್ದ ಸುಬ್ಬನ್ ಸಾಬಿಗೆ ಕೈಕಾಲುಗಳ ನಡುಕ ಶುರುವಾಗಿತ್ತು, ಮುಂದೆ ಸ್ವಲ್ಪ ದೂರ ನಡೆಯುತ್ತಿದಂತೆಯೇ ದಾರಿಯಲ್ಲಿ ಆನೆಯ ಲದ್ದಿಯ ರಾಶಿ ಬಿದ್ದಿದ್ದು, ಮರಿಗ ಲದ್ದಿಯನ್ನು ನೋಡಿ
"ಈಗತಾನೆ ಲದ್ದಿ ಇಟ್ಟಿದೆ ನೋಡು" ಎಂದು ಗುಸುಗುಸನೇ ಕಿವಿಯ ಬಳಿ ನನಗೆ ಹೇಳಿದ, ಸುಬ್ಬನ್ ಸಾಬಿಯು ದಿಗಿಲು ಮತ್ತು ಕುತೂಹಲದಿಂದ ಬಾಯಿಯ ಬಳಿ ಕಿವಿಯನ್ನು ಇಟ್ಟು "ಏನು. . . ಏನು. . . ?" ಎಂದು ಗುಸುಗುಸು ಭಾಷೆಯಲ್ಲಿ ಕೇಳಿದ. "ಏನು ಇಲ್ಲಾ. . ಇರೋ ಮಾರಾಯ. .!" ಎಂದು ಗದರಿಸಿದೆ, ಅವನಿಗೆ ಅದು ತಿಳಿಯದೆ ಮತ್ತೆ ಮೆದು ದ್ವನಿಯಲ್ಲಿ " ಏನು. .ಏನು. . ?" ಎಂದು ಕೇಳಿದ. "ಏ ಕಿವುಡ. . .ಕಿವಿ ಕೇಳಾಕಿಲ್ವಾ. . .ನಿಂಗೆ" ಎಂದು. "ಲದ್ದಿ ಫ್ರೆಶಾಗಿ ಇದೆಯಂತೆ, ಆನೆ ಇಲ್ಲೇ ಎಲ್ಲೋ ಇದೆಯಂತೆ ಹುಷಾರು ಎಂದ ಮರಿಗ" ಎಂದು ಹೇಳಿದೆ.

ಅಷ್ಟರಲ್ಲಿ ಸುಬ್ಬನ್ ಸಾಬಿಯ ಕಣ್ಣುಗಳು ಆನೆಯ ಲದ್ದಿಯ ಮೇಲೆ ಇತ್ತು. ಲದ್ದಿಯ ಮೇಲೆಲ್ಲ ಹೊಗೆ ಮೆಲ್ಲನೆ ಮೇಲಕ್ಕೆ ಆವಿಯಾಗುತ್ತಿತ್ತು, ಲದ್ದಿಯನ್ನು ಮುಟ್ಟಿನೋಡಿದ, ಬಿಸಿ ಬಿಸಿಯಾಗಿ ಆವಿಯಾಗುತ್ತಿದ್ದ ಹೊಗೆ ಸುಬ್ಬನ್ ಸಾಬಿಯ ಮೂಗಿಗೆ ರಾಚುತ್ತಿದ್ದಂತೆ ಮೂರ್ಚೆಹೋದವನಂತೆ ಕೈಕಾಲುಗಳ ನಡುಕ ದ್ವಿಗುಣವಾಗುತ್ತ ಹೋಯಿತು. ಇದ್ದಕ್ಕಿದಂತೆ ಸುಬ್ಬನ್ ಸಾಬಿಯು "ಏ ಹೋಗೋ ಮಾರಾಯ. . .ನನ್ ಮುಂದೆ ಬರೋದಿಲ್ಲಪ್ಪ" ಬೇಕಾದ್ರೆ ನೀವ್ ಹೋಗಿ ನಾನ್ ಬರೋದಿಲ್ಲ. . !" ಎಂದು ಪಟ್ಟು ಹಿಡಿದ. ಅಷ್ಟರಲ್ಲಿ ಮುಂದೆ ಇದ್ದ ಮರಿಗನಿಗೆ ದಾರಿ ತಪ್ಪಿ ಹೋಗಿತ್ತು, ತುಂಬ ಹಿಂದೆ ಬಂದಿದ್ದು, ದಾರಿ ಗೊತ್ತಗೊದಿಲ್ಲ, ತುಂಬ ಹಿಂದೆನೆ ದಾರಿ ತಪ್ಪಸಿಕೊಂಡಿದ್ದಿವೀ ಬನ್ನಿ ಹಿಂದೆ, ಅನೆ ಬೇರೆ ಇಲ್ಲೇ ಎಲ್ಲೋ ಇದೆ, ಯಾಕ್ ಬೇಕ್ ಗಾಚಾರ. . .!" ಎಂದು ಹಿಂದಕ್ಕೆ ಕರೆಸಿಕೊಂಡು ಬಂದ. ಸುಬ್ಬನ್ ಸಾಬಿಗೆ ಆನೆದಾರಿ ಬಿಟ್ಟು ಹಿಂದಕ್ಕೆ ಬರುತ್ತಿರುವುದಕ್ಕೆ ಮುಖದಲ್ಲಿ, ನಡಿಗೆಯಲ್ಲಿ, ಧೈರ್ಯ ಎದ್ದು ಕಾಣುತ್ತಿತ್ತು.



ಮರಿಗನಿಗೆ ಕಾಡು ಚಿರಪರಿಚಿತ, ಯಾವಾಗಲು ಹಗಲಿನಲ್ಲಿ ದನ ಕುರಿ, ಎಮ್ಮೆಗಳೆಂದು ಕಾಡು ಸುತ್ತಿದರೆ, ಕಾಡುಹಂದಿ, ಮೊಲ, ಜಿಂಕೆಗಳೆಂದು ರಾತ್ರಿ ಬೇಟೆಗಾಗಿ ಕಾಡುಸುತ್ತುತ್ತಿದ್ದ, ಕಾಡು ದಾರಿಗಳಲ್ಲಿ ಚಲಿಸುವುದು ಮರಿಗನಿಗೆ ನೀರುಕುಡಿದ ಹಾಗೆ.
ಅದರೆ ಅಮಾವಸೆಗೋ ಹುಣ್ಣಿಮೆಗೋ ಒಂದು ಸಲ ಕಾಡುಸುತ್ತುವ ನಮಗೆ ಹೇಗೆ ತಿಳಿಯಬೇಕು ಕಾಡಿನ ದಾರಿಗಳು. ಮರಿಗನಿಗೆ ಕಾಡಿನ ದಾರಿಗಳು ಚೆನ್ನಾಗಿ ಗೊತ್ತಿರುರುವುದರಿಂದ ಫಾರೇಸ್ಟ್ ಡಿಪಾರ್ಟ್‌ಮೆಂಟ್‌ನವರು ಪ್ರತಿವರ್ಷ ಪ್ರಾಣಿಗಳ ಸೆನ್ಸಸ್‌ಗೆಂದು ಕರೆದುಕೊಂಡು ಹೋಗುತ್ತಿದ್ದರು, ಅಂತವನು ದಾರಿತಪ್ಪಿದ್ದು ನಮಗೆ ಅಶ್ಚರ್ಯವೇ ಆಯಿತು.

ಹೋದ ದಾರಿಯಲ್ಲಿಯೇ ಮತ್ತೆ ಸ್ವಲ್ಪದೂರ ಹಿಂದೆ ಬರುತ್ತಿರಬೇಕಾದರೆ ಬೆಟ್ಟದಿಂದಾಚೆ ಎಮ್ಮೆಗಳ ಶಬ್ಧ ಕೆಳಿಸಿಕೊಂಡ ಮರಿಗ ಬೆಟ್ಟದ ಕಡೆಗೆ ದಾರಿಯನ್ನು ಬದಲಾಯಿಸಿದ, ದಿಗಿಲುಬಿದ್ದ ಸುಬ್ಬನ್‌ಸಾಬಿಯ ಮುಖವನ್ನು ನೋಡಿ ಮರಿಗನಿಗೆ ನಗುಬರುತ್ತಿತ್ತು.

ಸುಬ್ಬನ್‌ಸಾಬಿಯನ್ನು ಕುರಿತು ಮರಿಗ " ಲೋ. . ಸಾಬಿ ಹಿಂಗ ಲದ್ದಿನೋಡಿ ದಿಗಿಲು ಬಿಳ್ತಿಯಾಲ್ಲ ಹೆಂಗೆ ಮಾರಾಯ ? ಇನ್ನೆನಾದ್ರು ಆನೆಗಿನೆ ಹೊಡ್ಕೊಸ್ಕೇ ಬಂದ್ರೆ ಏನ್ ಮಾಡ್ತಿಯಾ?" ಎಂದು ಬಯ್ದು ಬುದ್ದಿಹೇಳುತ್ತಾ ಬೆಟ್ಟವನ್ನು ಏರಿ ಮೇಲೆ ಬರಬೇಕಾದರೆ ಸುಬ್ಬನ್ ಸಾಬಿಗೆ ಆನೆಗಳಿಂದ ಬಚಾವ್ ಅಗುವ ಉಪಾಯದ ತಂತ್ರಗಳನ್ನು ಹೇಳುತ್ತಿದ, "ಆನೆ ಏನಾದ್ರು ಹಟ್ಟಿಸಿಕೊಂಡು ಬಂದರೆ ಹಾವಿನಂತೆ ಹಿಂಗೆ-ಹಂಗೆ ಓಡ್ಬೇಕು" ಎಂದು ತನ್ನ ಕೈಯನ್ನು ಆತ್ತ ಇತ್ತ ತಿರುವಿ ತೋರಿಸಿದ ಸುಬ್ಬನ್ ಸಾಬಿಗೆ.

ಸುಬ್ಬನ್ ಸಾಬಿಯು " ಅಲ್ಲ ಮರಿಗಣ್ಣ ಈ ಪೊದೆಗಳ ಮದ್ಯೆ ಹಿಂಗೆ–ಹಂಗೆ ಓಡೋದ್ ಹೆಂಗೆ? ಅದೆಲ್ಲ ಹಾಗಲ್ಲ ಬೇರೆ ಏನಾದ್ರು ಇದ್ರೆ ಹೇಳು" ಎಂದು ಕೇಳಿದ.

ಮರಿಗನ ಅನುಭವವೋ. . .ಅಥವಾ ಕತೆಯೋ ತಿಳಿಯದು, ಸುಬ್ಬನ್ ಸಾಬಿಗೆ ಮತ್ತೊಂದು ತಪ್ಪಿಸಿಕೊಳ್ಳುವ ಉಪಾಯವನ್ನು ಹೇಳಿದ, ನನಗೂ ಈ ರೀತಿಯ ಅನುಭವವಂತು ಆಗಿಲ್ಲ. ಆದರು ನಂಬುವಂತ್ತಿತ್ತು. ಅದೆನೆಂದರೆ ಆನೆಗಳು ಎಮ್ಮೆಗಳ ಬಳಿ ಬರುವುದಿಲ್ಲ. . ! ಎಮ್ಮೆಗಳನ್ನು ಕಂಡರೆ ಆನೆಗಳಿಗೆ ಭಯ. . .!

ಎಮ್ಮೆಗಳನ್ನು ಕಂಡರೆ ಆನೆಗಳು ಬೇರೆ ದಾರಿಯನ್ನು ಹಿಡಿಯುತ್ತಾವೆ ಎಂದು ಮರಿಗನ ವಾದ.

ಒಂದು ಪಕ್ಷದಲ್ಲಿ ಆನೆಗಳು ಹಟ್ಟಿಸಿಕೊಂಡು ಬಂದರೆ ಎಮ್ಮೆಗಳ ಬಳಿ ಹೋದರಾಯಿತು ಎಂದು ಸುಬ್ಬನ್ ಸಾಬಿಗೆ ಧೈರ್ಯ ತುಂಬುತ್ತಿದ್ದ ಮರಿಗ.



ಬೆಟ್ಟದ ಬಯಲು ಪ್ರದೇಶದಲ್ಲಿ ಎಮ್ಮೆಗಳು ಒಳ್ಳೆ ಹಸಿರು ಇದ್ದುದ್ದರಿಂದ ಬರ್‍ರಬರ್‍ರನೇ ಮೇಯುತ್ತಿದ್ದವು, ಮರಿಗನಿಗೆ ಎಮ್ಮೆಗಳ ಮೇಲೆ ಸಿಟ್ಟು ಬಂದು.

"ನಿಂ ಮನೆ ಕಾಯೋಗ. . . ಒತ್ತು ಸಾಲ್ದಾ ನಿಂಕಾ. .?

ಬರ್‍ರಿ ಇತ್ತಾ. . . ಭಾ. . . ಭಾ. . ."

ಎಂದು ಎಮ್ಮೆಗಳನ್ನು ಹಟ್ಟಿಕೊಂಡು ಬರುತ್ತಿರಬೇಕಾದರೆ ಸ್ವಲ್ಪ ಬಯಲು ಬಯಲು ಪ್ರದೇಶ, ಅಷ್ಟೇನು ಮರ ಪೊದೆಗಳು ವಿರಾಳವಾಗಿದವು. ಅಷ್ಟೇನು ದಟ್ಟ ಅರಣ್ಯವೇನಲ್ಲ, ಆನೆಗಳು ತಂಗುವ ಪ್ರದೇಶವೇನು ಅಲ್ಲ.

ಕೊಳ್ಳಗೆಹಣ್ಣು ಬಿಡುವ ಕಾಲವಾದ್ದರಿಂದ ನಾನು ಕಾಡುಜಾತಿಯ ಕೊಳ್ಳಗೆಹಣ್ಣುಗಳನ್ನು ಹಾರಿಸುತ್ತಾ, ತಿನ್ನುತ್ತಾ ಸಾಗುತ್ತಿದೆ. ಗಿಡದಲ್ಲಿ ಹಣ್ಣುಗಳು ಜೋತುಬಿದ್ದಿದವು, ನಾನು ಹಣ್ಣುಗಳನ್ನು ಕೀಳುತ್ತಿದೆ, ಮರಿಗ ಮತ್ತು ಸುಬ್ಬನ್ ಸಾಬಿ ನನಗೆ ಸಹಾಯ ಮಾಡಲು ಬಂದರು. ಹಣ್ಣುಗಳನ್ನು ಕಿತ್ತು ಕಿತ್ತು ಜೇಬುಗಳನ್ನು ತುಂಬುತ್ತಿದರು. ಎಮ್ಮೆಗಳು ಪಕ್ಕದಲ್ಲೇ ಮೇಯುತ್ತಿದವು.

ಅಲ್ಲೇ ಪಕ್ಕದಲ್ಲೇ. . . ಪೊದೆಯ ಹಿಂದೆ ಆನೆ ಇದ್ದಿದ್ದು, ಯಾರಿಗೂ ತಿಳಿದಿಲ್ಲ, ಸುಬ್ಬನ್ ಸಾಬಿ ಜೋರಾಗಿ ಮಾತನಾಡಿದು ಕೇಳಿಸಿಕೊಂಡವೋ ಏನೋ. . . . ಆನೆ ಜೋರಾಗಿ ಘೀಳಿಡುತ್ತ ನಮ್ಮ ಎದುರಿಗೆ ಪ್ರತ್ಯೇಕ್ಷವಾಗಿ ಓಡಿ ಬರುತ್ತಿತ್ತು.

ನಾನು ಮತ್ತು ಸಾಬಿ ಮರಿಗನ ಉಪಾಯದ ನೆನಪು ಬಂದು, ಎಮ್ಮೆಗಳ ಬಳಿ ಹೋಗಲು ಎಮ್ಮೆಗಳನ್ನು ನೋಡುತ್ತೇವೆ! ಎಮ್ಮೆಗಳು ಇಲ್ಲ. . . .! ಮರಿಗನು ಇಲ್ಲ. . . !

ಆನೆ ಘೀಳಿಟ್ಟ ತಕ್ಷಣ ಎಮ್ಮೆಗಳೆಲ್ಲ ಚಲ್ಲಪಿಲ್ಲಿಯಾಗಿ ಓಟಕಿತ್ತಿದವು, ಮರಿಗನು ಕೊಳ್ಳಗೆಹಣ್ಣುಗಳನ್ನು ಎಸೆದು, ಎಗಲ ಮೇಲಿದ ಟವಲನ್ನು ಬಾಯಿಯಲ್ಲಿ ಕಚ್ಚಿಕೊಂಡು ದೂರದಲ್ಲಿ ಓಡುತ್ತಿದ್ದ. ನಾನು ಕಾಲಿಗೆ ಬುದ್ದಿ ಹೇಳಿದೆ, ಸುಬ್ಬನ್ ಸಾಬಿ ಭಯದಿಂದ ಕೈಕಾಲುಗಳು ನಡುಕ ಬಂದು ಓಟದ ವೇಗದಲ್ಲಿ ಕೊಂಚ ನಿಧಾನವಾಯಿತ್ತು, ಸಧ್ಯ ಪುಣ್ಯಾತ್ಮ ಆನೆಗೆ ಸಿಗಲ್ಲಿಲ್ಲಾ. . !

ಮರಿಗನನ್ನು, ಮರಿಗನ ಉಪಾಯದ ಅಪಾಯವನ್ನು ಶಪಿಸುತ್ತ ಸುಬ್ಬನ್ ಸಾಬಿ ಎರಡು ಮೂರು ದಿನ ಸುದಾರಿಸಿಕೊಂಡ.

# ಕಾಳಿ

ಓ ತಾಯಿ. . . . . ಓ ದೇವಿ . . . . .
ಎಲ್ಲಿರುವೇ ಬಚ್ಚಿರುವೇ . . . . .

ಆ ಬೆಟ್ಟದಾಚ್ಚೆ ಈ ಗುಡ್ಡದಾಚೆ
ದೃಷ್ಟಿ ದಿಂಗತದಚೆ
ಸಮುದ್ರ ಸರೋವರಗಳಚೆ
ಮಳೆಯ ಮೋಡಗಳಚೆ
ಎಲ್ಲಿರುವೇ। ತಾಯಿ ನೀನು।

ಆ ನದಿಯಾಚೆ ಈ ಸಾಗರದಾಚೆ
ಗಿರಿ ಕಂದರಗಳಚೆ
ನೀಲಿ ಆಕಾಶದಚೆ
ಭೂವಿ ಗ್ರಹಗಳಚೆ
ಎಲ್ಲಿರುವೇ। ತಾಯಿ ನೀನು।

ಕಾಡಿನ ಹಸಿರೊಳಗೆ
ತುದಿ ಬೆಟ್ಟದ ಗುಡಿಯೊಳಗೆ
ಕಲ್ಲು ಗೋಪುರದೊಳಗೆ
ನನ್ನ ಹೃದಯದೊಳಗೆ
ಎಲ್ಲಿರುವೇ। ತಾಯಿ ನೀನು।

ಓ ತಾಯಿ . . . . . ಓ ದೇವಿ . . . . .
ಎಲ್ಲಿರುವೇ ಹೇಗಿರುವೇ
ಕಾಣು ತಾಯಿ ನೀನು
ಸದಾ ಎನ್ನ ಕಣ್ಣಿಗೆ
ವನ ಸೌದರ್ಯ ದೇವತೆಯಾಗಿ।

ಹಸಿರ ಗಿಡ–ಮರವಾಗಿ
ಮಂಜಿನ ಬೆಟ್ಟವಾಗಿ
ಜೋ ಎಂದು ಸುರಿವ ಮಳೆಯಾಗಿ
ಗುಡುಗಿನ ಸದ್ದಗಿ
ಹೊಳಪಿನ ಮಿಂಚಗಿ
ಪಕ್ಷಿ ಪ್ರಾಣಿಯಾಗಿ
ಸದಾ ಕಾಣೆನ್ನ ಕಣ್ಣಿಗೆ।

ಮೌನದ ಮಳೆಯಲ್ಲಿ
ಜಡಿಹಿಡಿದ ಜಾಡಲ್ಲಿ
ಮುಸುಕಾಗಿ ಮಬ್ಬಗಿ
ಗುಡುಗು ಮಿಂಚುಗಳಾಗಿ
ಕಾಣು ತಾಯೇ ಕಾಣು.